# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | **473 (520)** |
| **ಸದಸ್ಯರ ಹೆಸರು** | **ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)** |
| **ಉತ್ತರಿಸಬೇಕಾದ ದಿನಾಂಕ** | **21.02.2022** |
| **ಉತ್ತರಿಸಬೇಕಾದವರು** | **ಉನ್ನತ ಶಿಕ್ಷಣ ಸಚಿವರು** |

| | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರಿ ಪದವಿ ಕಾಲೇಜುಗಳಲ್ಲಿ ದೀರ್ಘ ಕಾಲದಿಂದ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿ ಹೆಚ್ಚಿಸಿ, ವೇತನ ಪರಿಷ್ಕರಣೆ ಮಾಡಿ, ವಾರ್ಷಿಕ 10 ತಿಂಗಳು ವೇತನ ನೀಡುವಂತೆ ಇತ್ತೀಚೆಗೆ ಸರ್ಕಾರ ಆದೇಶಿಸಲಾಗಿದೆಯೇ; | ಹೌದು.<br><br>ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 & ತಿದ್ದುಪಡಿ ದಿನಾಂಕ: 24.01.2022 ರಲ್ಲಿ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿ ಹೆಚ್ಚಿಸಿ, ವೇತನ ಪರಿಷ್ಕರಣೆ ಮಾಡಿ, ಸೆಮಿಸ್ಟರ್ ಅವಧಿಗೆ ಬದಲಾಗಿ ಶೈಕ್ಷಣಿಕ ವರ್ಷಕ್ಕೆ (10 ತಿಂಗಳಿಗೆ) ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿದೆ. |
| (ಆ) | ಸರ್ಕಾರದ ಈ ನಿರ್ಧಾರದಂತೆ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡುವಲ್ಲಿ ಅನುಸರಿಸಲಾಗುತ್ತಿರುವ ಮಾನದಂಡಗಳೇನು; (ವಿವರ ನೀಡುವುದು) | ಅತಿಥಿ ಉಪನ್ಯಾಸಕರಾಗಿ ಹೆಚ್ಚಿನ ಅವಧಿಗೆ ಸೇವೆ ಸಲ್ಲಿಸಿದವರಿಗೆ ಅತಿಥಿ ಉಪನ್ಯಾಸಕರ ನೇಮಕಾತಿಯಲ್ಲಿ ಪ್ರಾಧಾನ್ಯತೆ ಕೊಡುವುದು. ಇದಕ್ಕೆ ಸಂಬಂಧಪಟ್ಟ ಹಾಗೆ ಪ್ರಸ್ತುತ ಇಲಾಖೆಯಲ್ಲಿ ಅನುಸರಿಸುತ್ತಿರುವ ಮಾನದಂಡಗಳನ್ವಯ ಆಯ್ಕೆಪಟ್ಟಿ ತಯಾರಿಸುವಂತೆ ಸೂಚಿಸಲಾಗಿರುವ ಹಿನ್ನೆಲೆಯಲ್ಲಿ, ಅತಿಥಿ ಉಪನ್ಯಾಸಕರ ಆಯ್ಕೆಗೆ ಸಂಬಂಧಿಸಿದಂತೆ ಈ ಹಿಂದೆ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಸಲ್ಲಿಸಿರುವ ಸೇವಾ ಅನುಭವ ಹಾಗೂ ವಿದ್ಯಾರ್ಹತೆಯನ್ನು ಆಧರಿಸಿ, ಈ ಕೆಳಕಂಡಂತೆ 100 ಅಂಕಗಳಿಗೆ ಮಾನದಂಡಗಳನ್ನು ನಿಗಧಿಪಡಿಸಲಾಗಿದೆ. |

| ಕ್ರ. ಸಂ | ವಿದ್ಯಾರ್ಹತೆ | ಗರಿಷ್ಠ ಅಂಕಗಳು |
|---|---|---|
| 1. | <u>ವಿದ್ಯಾರ್ಹತೆ:</u><br>ಅಭ್ಯರ್ಥಿಯು ಎರಡು ವರ್ಷ ಸ್ನಾತಕೋತ್ತರ ಪದವಿಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ 25%ನ್ನು ಗಣನೆಗೆ ತೆಗೆದುಕೊಳ್ಳುವುದು.<br>*(ಉದಾ: ಅಭ್ಯರ್ಥಿಯು ಸ್ನಾತಕೋತ್ತರ ಪದವಿಯಲ್ಲಿ ಶೇಕಡ 60 ಅಂಕ ಪಡೆದಿದ್ದಲ್ಲಿ, ಅದರ ಶೇಕಡ 25ರಷ್ಟು ಭಾಗವನ್ನು ಅಂದರೆ 15 ಅಂಕಗಳು ಎಂಬುದಾಗಿ ಗಣನೆಗೆ ತೆಗೆದುಕೊಳ್ಳುವುದು).* | 25 |
| 2. | <u>ಹೆಚ್ಚುವರಿವಿದ್ಯಾರ್ಹತೆ:</u><br>1) ಪಿಹೆಚ್.ಡಿ ವಿದ್ಯಾರ್ಹತೆ ಪಡೆದಿದ್ದಲ್ಲಿ<br>2) ಎನ್‌ಇಟಿ/ಕೆ-ಸೆಟ್/ಎಸ್‌ಎಲ್‌ಇಟಿ ವಿದ್ಯಾರ್ಹತೆ ಪಡೆದಿದ್ದಲ್ಲಿ<br>3) ಎಂ.ಫಿಲ್. ವಿದ್ಯಾರ್ಹತೆ ಪಡೆದಿದ್ದಲ್ಲಿ | <br>12<br>09<br>06 |
| 3. | <u>ಅನುಭವ:</u><br>ಹಿಂದಿನ ವರ್ಷಗಳಲ್ಲಿ ಸರ್ಕಾರಿ ಪ್ರಥಮದರ್ಜೆಕಾಲೇಜುಗಳಲ್ಲಿ ಮಾತ್ರಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಅವಧಿಗೆ ಪ್ರತಿ ಶೈಕ್ಷಣಿಕ ವರ್ಷಕ್ಕೆ 3 ಅಂಕಗಳಂತೆ ಗರಿಷ್ಠ 16 ವರ್ಷಗಳಿಗೆ 48 ಅಂಕಗಳನ್ನು ಮಿತಿಗೊಳಿಸುವುದು. *(ಪ್ರತಿ ಶೈಕ್ಷಣಿಕ ವರ್ಷದ ಪೂರ್ಣ ಅವಧಿ ಸೇವೆಗೆ 3 ಅಂಕಗಳು, ಶೈಕ್ಷಣಿಕ ವರ್ಷದಲ್ಲಿ 1 ಸೆಮಿಸ್ಟರ್ ನಲ್ಲಿ ಮಾತ್ರ ಸೇವೆ ಸಲ್ಲಿಸಿದ್ದರೆ 1.5 ಅಂಕಗಳು)* | 48 |
| | ಒಟ್ಟು | 100 |
| | ಸೂಚನೆ: ವಿಕಲಚೇತನ ಅಭ್ಯರ್ಥಿಗಳಿಗೆ 10 ಅಂಕಗಳನ್ನು ಹೆಚ್ಚುವರಿಯಾಗಿ ನೀಡುವುದು. | |

| | | |
|---|---|---|
| (ಇ) | 15 ಗಂಟೆಗಳ ಬೋಧನಾ ಅವಧಿಗೆ ಎಷ್ಟು ಮಂದಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲಾಗಿದೆ; (ವಿಷಯವಾರು ವಿವರ ನೀಡುವುದು) | ಸರ್ಕಾರಿ ಪದವಿ ಕಾಲೇಜುಗಳಲ್ಲಿ ಕಲಾ ಮತ್ತು ವಾಣಿಜ್ಯ ವಿಷಯಗಳಿಗೆ 15 /19 ಗಂಟೆಗಳ ಬೋಧನಾ ಅವಧಿಗೆ ಒಟ್ಟು 5498 ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲಾಗಿದೆ.<br>(ವಿಷಯವಾರು ವಿವರವನ್ನು ಅನುಬಂಧದಲ್ಲಿರಿಸಿದೆ) |
| (ಈ) | 15 ಗಂಟೆಗಳ ಬೋಧನಾ ಅವಧಿ ಮಾಡುವವರು ಯು.ಜಿ.ಸಿ. ಶೈಕ್ಷಣಿಕ ವಿದ್ಯಾರ್ಹತೆ ಹೊಂದಿರುತ್ತಾರೆಯೇ; | ಪ್ರಸ್ತುತ, ನೂತನ ಆಯ್ಕೆ ಪ್ರಕ್ರಿಯೆಯನ್ವಯ ಅತಿಥಿ ಉಪನ್ಯಾಸಕರ ಕರ್ತವ್ಯಕ್ಕೆ ವರದಿ ಮಾಡಿ ಕೊಂಡಿರುವ 7005 ಅತಿಥಿ ಉಪನ್ಯಾಸಕರಲ್ಲಿ 3473 ಅತಿಥಿ ಉಪನ್ಯಾಸಕರು ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಯು.ಜಿ.ಸಿ. ನಿಯಮದಂತೆ ಶೈಕ್ಷಣಿಕ ವಿದ್ಯಾರ್ಹತೆಯನ್ನು ಹೊಂದಿರುತ್ತಾರೆ. |
| (ಉ) | ಅತಿಥಿ ಉಪನ್ಯಾಸಕರಲ್ಲಿ ಎಷ್ಟು ಮಂದಿ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಯು.ಜಿ.ಸಿ. ನಿಯಮದಂತೆ ಶೈಕ್ಷಣಿಕ ವಿದ್ಯಾರ್ಹತೆಯನ್ನು ಹೊಂದಿದ್ದಾರೆ; | |
| (ಊ) | ರಾಜ್ಯದಲ್ಲಿರುವ ಸುಮಾರು 14,500 ಮಂದಿ ಎಲ್ಲಾ ಅತಿಥಿ ಉಪನ್ಯಾಸಕರಿಗೂ ಸದರಿ ನೇಮಕಾತಿಯಲ್ಲಿ ಅವಕಾಶ ಕಲ್ಪಿಸಲಾಗಿದೆಯೇ? | ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 ಮತ್ತು ತಿದ್ದುಪಡಿ ದಿನಾಂಕ: 24.01.2022 ರಲ್ಲಿ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿಯನ್ನು ಈ ಹಿಂದೆ ಇದ್ದ ವಾರಕ್ಕೆ ಗರಿಷ್ಠ 8/10 ಗಂಟೆಗಳ ಬದಲಾಗಿ ಗರಿಷ್ಠ 15/19 ಗಂಟೆಗಳಿಗೆ ಹೆಚ್ಚಿಸಲಾಗಿರುತ್ತದೆ. ಅದರನ್ವಯ ಕಾಲೇಜುಗಳಲ್ಲಿ ವಿವಿಧ ವಿಷಯಗಳ ಕೋರ್ಸ್/ ಕಾಂಬಿನೇಷನ್‌ಗಳು ಮತ್ತು ವಿದ್ಯಾರ್ಥಿಗಳ ಪ್ರವೇಶಾತಿ ಸಂಖ್ಯೆಗನುಗುಣವಾಗಿ ಲಭ್ಯವಾಗುವ ಒಟ್ಟು ಕಾರ್ಯಭಾರದಲ್ಲಿ 15/19 ಗಂಟೆಗಳ ಕಾರ್ಯಭಾರ ಹಾಗೂ ಉಳಿಕೆಯಾಗುವ ಭಾಗಶಃ ಕಾರ್ಯಭಾರಕ್ಕೆ ಒಟ್ಟು ಅಂದಾಜು 10,500 ಅತಿಥಿ ಉಪನ್ಯಾಸಕರು ಅಗತ್ಯವಿದ್ದು, ಈಗಾಗಲೇ ಆನ್‌ಲೈನ್ ಕೌನ್ಸಿಲಿಂಗ್ ಮೂಲಕ ಒಟ್ಟು 7005 ಅತಿಥಿ ಉಪನ್ಯಾಸಕರು ಸಂಬಂಧಪಟ್ಟ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಇನ್ನೂ ಉಳಿಕೆಯಾಗಿರುವ ಕಾರ್ಯಭಾರಕ್ಕೆ ಅಗತ್ಯವಿರುವ ಅತಿಥಿ ಉಪನ್ಯಾಸಕರನ್ನು 2ನೇ ಸುತ್ತಿನ ಆನ್‌ಲೈನ್ ಕೌನ್ಸಿಲಿಂಗ್ ಮೂಲಕ ಆಯ್ಕೆ ಮಾಡಿಕೊಳ್ಳಲು ಕ್ರಮಕೈಗೊಳ್ಳಲಾಗುತ್ತಿದೆ. |

**ಇಡಿ 57 ಡಿಸಿಇ 2022**

**(ಡಾ. ಅಶ್ವಥ್ ನಾರಾಯಣ ಸಿ.ಎನ್.)**
**ಉನ್ನತ ಶಿಕ್ಷಣ, ಐ.ಟಿ.-ಬಿ.ಟಿ.ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು**

ಕರ್ನಾಟಕ ಸರ್ಕಾರ

**ಕಾಲೇಜು ಶಿಕ್ಷಣ ಇಲಾಖೆ** ಅನುಬಂಧ

**15/19 ಗಂಟೆಗಳ ಬೋಧನಾ ಅವಧಿಗೆ ನೇಮಕಗೊಂಡಿರುವ ಅತಿಥಿ ಉಪನ್ಯಾಸಕರ ವಿಷಯವಾರು ವಿವರ**

| Sl. No. | Subjects | Count |
|---|---|---|
| 1 | Biochemistry | 3 |
| 2 | Biotechnology | 18 |
| 3 | Botany | 120 |
| 4 | Business Administration | 33 |
| 5 | Business Management/Business Administration /Master of International Business | 242 |
| 6 | Chemistry | 418 |
| 7 | Commerce | 1269 |
| 8 | Computer Fundamentals | 38 |
| 9 | Computer Science | 463 |
| 10 | Criminology | 11 |
| 11 | Economics | 283 |
| 12 | Education | 5 |
| 13 | Electronics | 3 |
| 14 | English (Language) | 370 |
| 15 | Geography | 51 |
| 16 | Geology | 5 |
| 17 | Hindi (Language) | 39 |
| 18 | History | 319 |
| 19 | HOME SCIENCE | 3 |
| 20 | HOME SCIENCE-ECEA | 1 |
| 21 | HOME SCIENCE-FOOD AND NUTRITION, | 5 |
| 22 | HOME SCIENCE-RESOURCE MANAGEMENT | 2 |
| 23 | HOME SCIENCE-TEXTILE AND CLOTHING | 4 |
| 24 | INDIAN CONSTITUTION | 2 |
| 25 | Industrial Chemistry | 1 |
| 26 | Journalism | 22 |
| 27 | Kannada (Language) | 565 |
| 28 | Law | 13 |
| 29 | Mathematics | 295 |

| Sl. No. | Subjects | Count |
|---|---|---|
| 30 | Microbiology | 23 |
| 31 | Music | 2 |
| 32 | Optional English | 15 |
| 33 | Optional Kannada | 62 |
| 34 | Optional Marathi | 1 |
| 35 | Optional Urdu | 2 |
| 36 | Physics | 330 |
| 37 | Political Science | 255 |
| 38 | Psychology | 12 |
| 39 | Sanskrit (Language) | 3 |
| 40 | Science and Society | 5 |
| 41 | Social Work | 52 |
| 42 | Statistics | 5 |
| 43 | Telugu (Language) | 1 |
| 44 | Urdu (Language) | 16 |
| 45 | Zoology | 111 |
| | Grand Total | 5498 |

C:\Users\ASST1-~1\AppData\Local\Temp\520_Subject wise Guest faculty18022022